ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟೆಂಬರ್, 2020

ದೇಶದಲ್ಲಿ ಉದ್ಯಮಸ್ನೇಹಿ (Ease of Doing Business) ಪಟ್ಟಿಯಲ್ಲಿ ರಾಜ್ಯದ ಕುಸಿತ ಕುರಿತು

ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) :-

963(1087) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ 3 ವರ್ಷಗಳಲ್ಲಿ ದೇಶದಲ್ಲಿ ಉದ್ಯಮಸ್ನೇಹಿ (Ease of Doing Business) ರಾಜ್ಯಗಳ ಪಟ್ಟಿಯಲ್ಲಿ ಕರ್ನಾಟಕ ರಾಜ್ಯವು ಯಾವ ಸ್ಥಾನಗಳನ್ನು ಪಡೆದಿದೆ; (ಮಾಹಿತಿ ನೀಡುವುದು)

(ಆ) ಇತ್ತೀಚೆಗೆ ಉದ್ಯಮಸ್ನೇಹಿ (Ease of Doing Business) ರಾಜ್ಯಗಳ ಪಟ್ಟಿಯಲ್ಲಿ ಕರ್ನಾಟಕ ರಾಜ್ಯವು 17ನೇ ಸ್ಥಾನಕ್ಕೆ ಕುಸಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಇ) ಈ ಕುಸಿತಕ್ಕೆ ಕಾರಣಗಳೇನು; ಮತ್ತು ಇದನ್ನು ಸರಿಪಡಿಸಲು ಸರ್ಕಾರದ ಕ್ರಮವೇನು; (ವಿವರ ನೀಡುವುದು)

(ಈ) ಪ್ರಸಕ್ತ ಕರೋನಾ ಮಹಾಮಾರಿ ಹಿನ್ನಲೆಯಲ್ಲಿ ರಾಜ್ಯದ ಜನರು ಸಂಕಷ್ಟದಲ್ಲಿರುವಾಗ ಹಾಗೂ ನಿರುದ್ಯೋಗ ಪ್ರಮಾಣ ಹೆಚ್ಚಾಗಿ ಇರುವುದರಿಂದ ರಾಜ್ಯವು ಉದ್ಯಮಸ್ನೇಹಿ ಪಟ್ಟಿಯಲ್ಲಿ ಕುಸಿತವಾಗಿರುವುದರ ಬಗ್ಗೆ ಸರ್ಕಾರದ ನಿಲುವೇನು; (ವಿವರ ನೀಡುವುದು)

(ಉ) ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿ ಕೈಗಾರಿಕೆ ಉದ್ಯಮ ಸ್ಥಾಪಿಸಲು ಎಷ್ಟು ಮೊತ್ತದ ಬಂಡವಾಳ ಹೂಡಿಕೆಯಾಗಿದೆ ಮತ್ತು ಹೊಸದಾಗಿ ಎಷ್ಟು ಕೈಗಾರಿಕೆಗಳು (ಬೃಹತ್ ಮತ್ತು ಮಧ್ಯಮ) ಸ್ಥಾಪನೆಯಾಗಿದೆ? (ವರ್ಷವಾರು ಸಂಪೂರ್ಣ ವಿವರ ನೀಡುವುದು)